# ಸ್ತುತಿ ಅರ್ಥ ಭೋಧಿನೀ

ಶ್ರೀ ಹರಿವಾಯುಸ್ತುತಿಯ ವಿವರಣೆ



2/20/2010

J. V. Acharya

# ಮುನ್ನುಡಿ

ज्ञानानंदमयं देवं निर्मलं स्फटिकाकृतिम् ।
आधारं सर्व विद्यानां हयग्रीवमुपास्महे ॥

ಶ್ರೀ ಹರಿವಾಯುಸ್ತುತಿಯೆಂಬ ಮಹಾ ಶಾಸ್ತ್ರಕಾವ್ಯದ ಪಠನೆಯು, ಶ್ರೀ ಶ್ರೀ ವೇದಾತ್ಮ ತೀರ್ಥರು, ಶ್ರೀ ಶ್ರೀ ವಿಶ್ವಪತಿ ತೀರ್ಥರು, ಶ್ರೀ ಶ್ರೀ ಸತ್ಯಪ್ರಮೋದ ತೀರ್ಥರು ಮತ್ತು ಶ್ರೀ ಚಲಾರಿ ಆಚಾರ್ಯರು, ಕುಂಭಕೋಣಂ ರಾಮರಾಯರು ಹಾಗೂ ಬನ್ನಂಜೆ ಗೋವಿಂದಾಚಾರ್ಯರ ವ್ಯಾಖ್ಯಾನಗಳನ್ನು ಅನುಸರಿಸಿ ನಡೆಯಿತು. ಈ ಪಾಠವು ಸರ್ವಧಾರಿ ನಾಮ ಸಂವತ್ಸರದ ಕಡೆಯ ಅರ್ಧದಿಂದ ಪ್ರಾರಂಭಗೊಂಡು, ವಿರೋಧಿನಾಮ ಸಂವತ್ಸರದ ಕಡೆಯವರೆಗೂ (February 8, 2009 – February 14. 2010 ಶ್ರೀ ಹರಿ–ವಾಯು–ಗುರುಗಳ ಪ್ರೇರಣೆಯ ಮೇರೆಗೆ ದೂರವಾಣಿಯ ಮುಖಾಂತರ ಅಮೆರಿಕಾ ಸಂಯುಕ್ತ ಸಂಸ್ಥಾನದಲ್ಲಿ ನಡೆಯಿತು. ಶ್ರೀಯುತ ಜೆ.ವಿ.ಆಚಾರ್ಯರ ಜ್ಞಾನಯುತ ನೇತೃತ್ವದಲ್ಲಿ ನಡೆದ ದೂರ–ಕಲಿಕೆಯ ಪಾಠವನ್ನು ದೇಶದ ನಾನಾ ಕಡೆಯಿಂದ ಸೇರಿದ ಕೂಟವು ಸ್ವೀಕರಿಸಿತು.

ಶ್ರೀಮದಾಚಾರ್ಯರ ತತ್ವವನ್ನು, ಮತ್ತು ಶಾಸ್ತ್ರೋಕ್ತ ವಿಷಯಗಳನ್ನು ಶ್ರೀ ಹರಿವಾಯುಸ್ತುತಿಯಲ್ಲಿ ಕಾಣಬಹುದು. ಅರ್ಥವನ್ನು ಚೆನ್ನಾಗಿ ತಿಳಿದು, ಮನನ ಮಾಡಿ ಸ್ತುತಿಸುವ ಶ್ರೀ ಹರಿವಾಯುಸ್ತುತಿಯು ಜ್ಞಾನಾರ್ಜನೆಗೆ ಸಾಧನವಾಗುವುದು ಎಂಬ ಅಚಲವಾದ ನಂಬಿಕೆಯಿಂದ, ಈ ಜ್ಞಾನವನ್ನು ಮುಂದಿನ ಪೀಳಿಗೆಗೆ ಪುಸ್ತಕ ಮುಖೇನ ತಲುಪಿಸಬೇಕೆಂಬ, ಹವಣಿಕೆಯಲ್ಲಿ ಶ್ರೀ ಭಾರತೀ ರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಲಕ್ಷ್ಮೀನಾರಾಯಣನ ಪ್ರೇರಣೆಯ ಮೇರೆಗೆ ಶ್ರೀ ಹರಿವಾಯುಸ್ತುತಿಯ ಪಠನವನ್ನು 'ಸ್ತುತಿ ಅರ್ಥ ಭೋಧಿನೀ' ಎಂಬ ಈ ಪುಸ್ತಕ ಮುಖೇನ ಸಂಕಲಿಸಲಾಗಿದೆ.

ಈ ಪುಸ್ತಕದಲ್ಲಿ ಶ್ರೀ ಹರಿವಾಯುಸ್ತುತಿಯ ಪ್ರತಿಯೊಂದು ಶ್ಲೋಕವನ್ನು ಆರು ರೀತಿಯಲ್ಲಿ ವಿವರಿಸಲಾಗಿದೆ. ಶ್ಲೋಕದ ಮೂಲ ರೂಪ, ನಂತರದಲ್ಲಿ ಪದ ಭೇಧಗಳೊಂದಿಗೆ ಪ್ರಾರಂಭಗೊಂಡು ಆ ಶ್ಲೋಕದ ಮೂಲ ಚಿಂತನೆಯನ್ನು ಕೊಡಲಾಗಿದೆ. ಮೂಲ ಚಿಂತನೆಯ ನಂತರದಲ್ಲಿ ಅನ್ವಯಕ್ರಮದಲ್ಲಿ ಲಿಖಿತ ಅರ್ಥವನ್ನು ಕೊಡಲಾಗಿದೆ. ಈ ಅರ್ಥಗಳನ್ನು ಓದಿ ತಿಳಿದಾಗ ನೋಡಬಹುದಾದ ವಿಶೇಷತೆಯನ್ನು ಪ್ರತ್ಯೇಕವಾಗಿ ತಿಳಿಸಿಕೊಟ್ಟು, ನಂತರದಲ್ಲಿ ಈ ಪಠನೆಯಿಂದ ಓದುಗರಿಗೆ ಬರಬಹುದಾದ ಜಿಜ್ಞಾಸೆಗಳನ್ನು ಪ್ರಶ್ನೋತ್ತರಗಳ ಮೂಲಕ ಪರಿಹರಿಸುವ ಪ್ರಯತ್ನವೂ ಇಲ್ಲಿದೆ. ಈ ಪ್ರಶ್ನೋತ್ತರದಲ್ಲಿ ಕಾಣುವ ಶಿಶ್ಯವೃಂದದ ಹೆಸರುಗಳನ್ನು ಸಮಯೋಚಿತವಾಗಿ ಉಪಯೋಗಿಸಲಾಗಿದೆ.

ಶ್ರೀ ಕೃಷ್ಣಾರ್ಪಣಮಸ್ತು

# ಶ್ರೀ ನೃಸಿಂಹ ನಖ ಸ್ತುತಿಃ

*ಶ್ರೀಹರಿಯ ಅವತಾರಗಳಲ್ಲಿ ಒಂದಾದ ನರಸಿಂಹಾವತಾರವನ್ನು ನಖಸ್ತುತಿಯ ಮೊದಲನೇ ಶ್ಲೋಕದಲ್ಲಿ ಶ್ರೀಮದಾಚಾರ್ಯರು ವೇದಮಂತ್ರಗಳ ಅನುವಾದ ಪೂರ್ವಕವಾಗಿ ರಚಿಸಿಕೊಟ್ಟಿದ್ದಾರೆ. ಪರಮಾತ್ಮನ ಅವತಾರಕ್ಕೂ, ಪರಮಾತ್ಮನಿಗೂ ಮತ್ತು ಅವನ ಉಗುರು ಅಥವಾ ನಖಗಳಿಗೂ ಯಾವ ರೀತಿಯ ವ್ಯತ್ಯಾಸವಿಲ್ಲ ಎಂದು ತಿಳಿಸಿಕೊಡುವ ಸ್ತುತಿ, ನಖಸ್ತುತಿ. ಈ ಶ್ಲೋಕವು ಎರಡು ಛಂದಸ್ಸಿನಿಂದ ರಚಿಸಲ್ಪಟ್ಟಿದೆ – ಶಾರ್ದೂಲ ವಿಕ್ರೀಡಿತಾ (ಪೂರ್ವಾರ್ಧ – ೧೯ ಅಕ್ಷರ) ಮತ್ತು ಶ್ರಗ್ಧರ (ಉತ್ತರಾರ್ಧ – ೨೧ ಅಕ್ಷರ) – ಈ ಚಂದಸ್ಸುಗಳ ಐಕ್ಯದಲ್ಲಿ ನೃಸಿಂಹಾವತಾರವನ್ನು ತೋರಿಸಿಕೊಟ್ಟಿದ್ದಾರೆ. ಈ ನಖಸ್ತುತಿಯನ್ನು ತ್ರಿವಿಕ್ರಮ ಪಂಡಿತರ ಕೃತಿಯಾದ ಶ್ರೀ ಹರಿ ವಾಯುಸ್ತುತಿಯ ಜೊತೆಯಲ್ಲಿ ಸಂಪುಟೀಕರಣವಾಗಿ ಪಾರಾಯಣ ಮಾಡುವುದು ರೂಢಿಯಲ್ಲಿದೆ.*

**ಪಾಂತ್ವಸ್ಮಾನ್ ಪುರುಹೂತವೈರಿ ಬಲವನ್ ಮಾತಜ ಮಾದ್ಯತ್ ಘಟಾ**
**ಕುಂಭೋಚ್ಚಾದ್ರಿ ವಿಪಾಟನಾಧಿಕ ಪಟು ಪ್ರತ್ಯೇಕ ವಜ್ರಾಯಿತಾಃ ।**
**ಶ್ರೀಮತ್ಕಂಠೀರವಾಸ್ಯ ಪ್ರತತ ಸುನಖರಾ ದಾರಿತಾರಾತಿದೂರ**
**ಪ್ರದ್ವಸ್ತಧ್ವಾಂತ ಶಾಂತ ಪ್ರವಿತತ ಮನಸಾ ಭಾವಿತಾನಾಕಿವೃಂದೈಃ ॥ ೧ ॥**

## ಪದ ಛೇದ:

**ಪಾನ್ತು ಅಸ್ಮಾನ್ ಪುರುಹೂತ ವೈರಿ ಬಲವನ್ ಮಾತಜ ಮಾದ್ಯತ್ ಘಟಾ ।**
**ಕುಂಭ ಉಚ್ಚ ಅದ್ರಿ ವಿಪಾಟನ ಅಧಿಕ ಪಟು ಪ್ರತ್ಯೇಕ ವಜ್ರಾಯಿತಾಃ ।**
**ಶ್ರೀಮತ್ ಕಂಠೀರವ ಅಸ್ಯ ಪ್ರತತ ಸುನಖರಾ ದಾರಿತ ಅರಾತಿದೂರ ।**
**ಪ್ರದ್ವಸ್ತ ಧ್ವಾನ್ತ ಶಾಂತ ಪ್ರವಿತತ ಮನಸಾ ಭಾವಿತಾ ನಾಕಿವೃಂದೈಃ ॥**

## ಪ್ರತಿಪದಾರ್ಥ:

**ಪಾಂತು**= ರಕ್ಷಿಸಲಿ,ಕಾಪಾಡಲಿ ; **ಅಸ್ಮಾನ್** = ನಮ್ಮೆಲ್ಲರನ್ನು; **ಪುರುಹೂತ** = ದೇವೇಂದ್ರ (ಇಂದ್ರ); **ವೈರಿ**=ವಿರೋಧಿ ; **ಬಲವನ್**=ಶಕ್ತಿಯುಳ್ಳ; **ಮಾತಜ ಮಾಧ್ಯತ್ ಘಟಾ** = ಮದವೇರಿದ ಆನೆಗಳ ಗುಂಪು; **ಕುಂಭೋಚ್ಚಾದ್ರಿ** = ಹಣೆಯೆಂಬ ಬೆಟ್ಟ; **ವಿಪಾಟನ ಅಧಿಕ ಪಟು** = ಸೀಳುವುದರಲ್ಲಿ ಹೆಚ್ಚಿನದಾದ ಸಾಮರ್ಥ್ಯ; **ಪ್ರತ್ಯೇಕ ವಜ್ರಾಯಿತಾಃ** = ಪ್ರತಿಯೊಂದೂ ವಜ್ರಾಯುಧಗಳು; **ಶ್ರೀಮತ್ಕಂಠೀರವ ಅಸ್ಯ** = ಲಕ್ಷ್ಮೀ ಸಮೇತನಾದ ಸಿಂಹದ ಮೋರೆಯುಳ್ಳವನ (ಲಕ್ಷ್ಮೀ ನರಸಿಂಹನ); **ಪ್ರತತ**=ಎಲ್ಲಾಕಡೆ, ಸರ್ವವ್ಯಾಪ್ತಿ; **ಸುನಖರ** = ಇಂದ್ರಿಯವಲ್ಲದೆ ಇರುವುದು – ಜ್ಞಾನಾನಂದಮಯವಾದ ಉಗುರು; **ದಾರಿತ** = ಸೀಳಲ್ಪಟ್ಟ; **ಅರಾತಿ** = ಶತ್ರುಗಳು (ಕಾಮಾದಿ ಶತ್ರುಗಳು) **ದೂರ**=ಬಹಳ ದೂರ; **ಪ್ರದ್ವಸ್ತ** = ನಾಶಮಾಡಲ್ಪಟ್ಟ; **ಧ್ವಾಂತ** = ಕತ್ತಲು (ಅಜ್ಞಾನವುಳ್ಳ) ; **ಶಾಂತ ಪ್ರವಿತತ ಮನಸಾ**=ಪರಮಾತ್ಮನಲ್ಲಿ ಭಕ್ತಿಯುಳ್ಳ ವಿಶಾಲವಾದ ಮನಸ್ಸಿನಿಂದ; **ಭಾವಿತಾ**=ಅರಳಿದ **ನಾಕಿವೃಂದೈಃ** = ದೇವತೆಗಳ ಸಮೂಹ

## ಅನ್ವಯ:

**ಶ್ರೀಮತ್ ಕಂಠೀರವ ಅಸ್ಯ ಪ್ರತತ ಸುನಖರಾ ಅಸ್ಮಾನ್ ಪಾನ್ತು ಪುರುಹೂತ ವೈರಿ ಬಲವನ್ ಮಾತಜ ಮಾದ್ಯತ್ ಘಟಾ ಕುಂಭ ಉಚ್ಚ ಅದ್ರಿ ವಿಪಾಟನ ಅಧಿಕ ಪಟು ಪ್ರತ್ಯೇಕ ವಜ್ರಾಯಿತಾಃ ದಾರಿತ ಅರಾತಿದೂರ ಪ್ರದ್ವಸ್ತ ಧ್ವಾನ್ತ ಶಾಂತ ಪ್ರವಿತತ ಮನಸಾ ಭಾವಿತಾ ನಾಕಿವೃಂದೈಃ ॥**

## ಚಿಂತನೆ:

*'ನಮ್ಮೆಲ್ಲರನ್ನು ರಕ್ಷಿಸಲಿ'. ಲಕ್ಷ್ಮೀ ಸಮೇತನಾದ ಕಂಠೀರವನ (ನರಸಿಂಹನ) ಜ್ಞಾನಾನಂದಮಯವಾದ, ಸರ್ವವ್ಯಾಪ್ತಿಯಾದ ಉಗುರುಗಳು ಎಂದರೆ ಮದವೇರಿದ ಆನೆಗಳ ಗುಂಪಿನ, ಬೆಟ್ಟದಂತಿರುವ ಹಣೆಯನ್ನು ಸೀಳುವುದರಲ್ಲಿ ಹೆಚ್ಚಿನ ಸಾಮರ್ಥ್ಯವುಳ್ಳ ಉಗುರುಗಳು, ಪ್ರತಿಯೊಂದೂ ವಜ್ರಾಯುಧದಂತೆ ಇರುವ ಉಗುರುಗಳು, ಅಜ್ಞಾನವೆಂಬ ಕತ್ತಲೆಯನ್ನು (ಕಾಮಾದಿ ಶತ್ರುಗಳನ್ನು) ಜ್ಞಾನವೆಂಬ ಬೆಳಕಿನಿಂದ ನಾಶಮಾಡಿ, ಬಹು ದೂರ ಓಡಿಸಿದಂತಹ ಉಗುರುಗಳು ಹಾಗೂ ದೇವತೆಗಳ ವೃಂದವು (ಸಮೂಹ) ಜ್ಞಾನದಿಂದ ತುಂಬಿರುವ ವಿಶಾಲವಾದ, ಅರಳಿರುವ ಮನಸ್ಸಿನಿಂದ ಪ್ರಾರ್ಥಿಸುವ ಆ ನಖಗಳು ನಮ್ಮೆಲ್ಲರನ್ನು ರಕ್ಷಿಸಲಿ.*

## ವಿಶೇಷತೆ:

*ಈ ಶ್ಲೋಕದಲ್ಲಿ ನಾವು ಹಿರಣ್ಯಕಶಿಪುವಿನಲ್ಲಿ ಅಜ್ಞಾನವನ್ನೂ ಮತ್ತು ಅದನ್ನು ನಿಃಶ್ಯೇಷವಾಗಿ ಹೊಡೆದೋಡಿಸುವ ಶಕ್ತಿಯನ್ನು ನರಸಿಂಹಾವತಾರದ ಉಗುರು (ಸರ್ವವ್ಯಾಪಿಯಾದ ಭಗವಂತ) ನಲ್ಲಿಯೂ ಕಾಣಬೇಕು. ಹಾಗೆ ಶಕ್ತಿಯುತವಾದ ನಖಗಳು (ಪರಮಾತ್ಮನು) ನಮ್ಮೆಲ್ಲರ ಅಜ್ಞಾನವನ್ನು ಹೊಡೆದೋಡಿಸಿ ನಮ್ಮನ್ನು ಕಾಪಾಡಲಿ.*

*ಈ ಶ್ಲೋಕದಲ್ಲಿ ಶ್ರೀಮನ್ಮಧ್ವಾಚಾರ್ಯರು ಎರಡು ಛಂದಸ್ಸಿನ ಪ್ರಯೋಗದ ಮುಖಾಂತರವೇ ನೃಸಿಂಹಾವತಾರವನ್ನು ವರ್ಣಿಸುತ್ತಾರೆ! ಮೊದಲ ಅರ್ಧ (ಪೂರ್ವಾರ್ಧ)ದಲ್ಲಿ 'ಶಾರ್ದೂಲ ವಿಕ್ರೀಡಿತಾ' – ಶಾರ್ದೂಲ ಎಂದರೆ ಸಿಂಹ, ವಿಕ್ರೀಡಿತಾ ಎಂದರೆ 'ಎದೆ ಬಗೆದು ಆಡುವುದು' (ಸೀಳುವುದು) – 'ಸಿಂಹವು ಆಟವಾಡಿದ' ಛಂದಸ್ಸು. ಉತ್ತರಾರ್ಧದಲ್ಲಿ 'ಶ್ರಗ್ಧರ' – 'ಕೊರಳಿನ ಮಾಲೆ' ಛಂದಸ್ಸನ್ನು ಉಪಯೋಗಿಸಿದ್ದಾರೆ. ಶ್ರೀ ಹರಿಯು ಸಿಂಹನಾಗಿ ಬಂದು, ಆಟವಾಡಿ, ಹಿರಣ್ಯಕಶಿಪುವಿನ ಕರುಳನ್ನು ಕೊರಳ ಮಾಲೆಯಾಗಿ ಧರಿಸಿದನೆಂಬ ಇಡೀ ನರಸಿಂಹಾವತಾರವನ್ನು ನಮ್ಮ ಕಣ್ಣ ಮುಂದೆ ತರುತ್ತಾರೆ.*

## ಪ್ರಶ್ನೋತ್ತರ

ಆಚಾರ್ಯ ಇಲ್ಲಿ 'ಶ್ರೀಮತ್‌ಕಂಠೀರವ' ಎಂದು ಹೇಳುವಾಗ 'ಶ್ರೀಮತ್' ಎಂಬುದರ ವಿಶೇಷತೆ ಏನು?
ಆಚಾರ್ಯ: 'ಶ್ರೀಮತ್' ಎಂದರೆ 'ಲಕ್ಷ್ಮೀ ಸಮೇತನಾದ' ಎಂದು ಅರ್ಥ ಬರುತ್ತದೆ. ಇಲ್ಲಿ ಆಚಾರ್ಯರು ಲಕ್ಷ್ಮೀದೇವಿಯನ್ನು ಯಾವರೀತಿಯಲ್ಲಿ ಸ್ಮರಿಸಬೇಕೆಂದು ಹೇಳುತ್ತಾರೆ. ಲಕ್ಷ್ಮಿಯನ್ನು ಸರ್ವಕಾಲವೂ ಭಗವಂತನ ಜೊತೆಯಲ್ಲಿಯೇ ಚಿಂತಿಸಬೇಕು. ಭಗವಂತನಿಲ್ಲದೆಯೇ ಲಕ್ಷ್ಮಿಯನ್ನು ಮಾತ್ರವೇ ಪೂಜಿಸಿದರೆ ಅದು ಲಕ್ಷ್ಮಿಯನ್ನು ಆರಾಧಿಸಿದ ಹಾಗೆ ಆಗುವುದಿಲ್ಲ. ಲಕ್ಷ್ಮಿಯನ್ನು ಸದಾಕಾಲವೂ ನಾರಾಯಣನ ಕೂಡಿಯೇ ಚಿಂತನೆಯಾಗಬೇಕು. ಆ ಕಾರಣದಿಂದ ಇಲ್ಲಿ ಲಕ್ಷ್ಮೀ ಸಮೇತನಾದ ನರಸಿಂಹನನ್ನು 'ಹೇ ಲಕ್ಷ್ಮೀನರಸಿಂಹನೇ' ಎಂದು ಸಂಭೋಧನೆ ಮಾಡುತ್ತಾರೆ.

ನರಹರಿ: ಗುರುಗಳೇ, ಈ ಶ್ಲೋಕದಲ್ಲಿ ಬರುವ ***'ಪ್ರತತ'*** ಎಂಬುದಕ್ಕೆ ಹೆಚ್ಚು ವಿವರವಾದ ಅರ್ಥವುಂಟೇ?
ಗುರುಗಳು: ಈ ಶ್ಲೋಕದಲ್ಲಿ ಪ್ರತತ ಎಂಬ ಪದ ಪರಮಾತ್ಮನ ವ್ಯಾಪ್ತಿಯನ್ನು ತಿಳಿಸಿಕೊಡುವ ಪದ. ಈ ಪದದಿಂದ ಶ್ರೀಮದಾಚಾರ್ಯರ ಸಿದ್ಧಾಂತವನ್ನೇ ಅರಿಯಬಹುದು. ಪರಮಾತ್ಮ ಎಲ್ಲೆಡೆ ಇದ್ದಾನೆ, ಅವನ ನಖಗಳು ಹಿರಣ್ಯಕಶಿಪುವಿನ ಸಂಹಾರದಿಂದ ಮೊದಲಾಗಿ ನಮ್ಮ ಮನಸ್ಸಿನ ಕಾಮಾದಿ ಶತ್ರುಗಳನ್ನು ನಾಶಮಾಡುವಲ್ಲಿಯವರೆಗೂ ಹಬ್ಬಿದೆ – ಸರ್ವವ್ಯಾಪ್ತತ್ವವನ್ನು ತಿಳಿಸಿಕೊಡುತ್ತದೆ.

ನರಸಿಂಹ: ಆಚಾರ್ಯ, ಈ ಶ್ಲೋಕದಲ್ಲಿ ನಖಾ ಎನ್ನುವ ಬದಲು, ಬರುವ ***'ಸುನಖರಾ'*** ಎಂಬುದರ ವಿಶೇಷತೆಯನ್ನು ವಿವರಿಸಿ,
ಆಚಾರ್ಯ: ನಖಗಳು ಸಂಹಾರ ಮಾಡುವ ಆಯುಧವಾದರೂ, ಆ ಸಂಹಾರ ಕ್ರಿಯೆಯೇ ಆನಂದವನ್ನು ಅನುಗ್ರಹಿಸುತ್ತದೆ (ಹಿರಣ್ಯಕಶಿಪುವಿನ ಸಂಹಾರವು ಭಕ್ತನಾದ ಪ್ರಹ್ಲಾದನಿಗೆ ಅನುಗ್ರಹವೇ). ಸು ಮತ್ತು ರಾ ಎಂಬ ಪದಗಳು ಆನಂದವನ್ನು ಸೂಚಿಸುತ್ತದೆ. ಹೀಗಾಗಿ ಸುನಖರಾ ಎಂಬ ಪದದಲ್ಲಿ ಪರಮಾತ್ಮನ ನಖಗಳು ಆನಂದದಾಯಕ ಎಂದು ಹೇಳಿದ್ದಾರೆ.

ಭಗವಂತನ ನಖಗಳಿಗೂ, ಭಗವಂತನಿಗೂ ಭೇಧವಿಲ್ಲ. ಸು' ಮತ್ತು ' ರಾ' ಎಂಬ ಎರಡು ಆನಂದ ಸೂಚಿಸುವ ಅಕ್ಷರಗಳ ನಡುವಿನಲ್ಲಿ ನಖ' ಎಂಬ ಪರಮಾತ್ಮನ ಸೂಚನೆಯನ್ನು ರಚಿಸಿದ್ದಾರೆ. ಆನಂದ ಸೂಚಕ ಅಕ್ಷರಗಳಲ್ಲಿ ನಖ ಪದವನ್ನು ಸಂಪುಟೀಕರಣವಾಗಿ ಹೊಂದಿಸಿ ನಮಗೆ ಪರಮಾತ್ಮನ ನಖ, ಅಂದರೆ ಭಗವಂತನೇ ಆನಂದಮಯ ಎಂದು ತಿಳಿಸಿಕೊಟ್ಟಿದ್ದಾರೆ.

ನಖಗಳ ಪರಾಕ್ರಮವನ್ನು ಯಾವ ರೀತಿಯಲ್ಲಿ ಕಾಣಬಹುದು?
ಗುರುಗಳು: ಈ ಶ್ಲೋಕದಲ್ಲಿ ಮದಿಸಿದ ಆನೆಗಳ ಗುಂಪು, ಆ ಆನೆಗಳ ಕುಂಭಸ್ಥಳಗಳನ್ನು ಉದ್ದೇಶಿಸಿ ದೈತ್ಯರ ಪರಾಕ್ರಮವನ್ನು ವಿವರಿಸುತ್ತಾರೆ. ಆನೆಯು ಬಹಳ ಶಕ್ತಿಯುಳ್ಳ ಪ್ರಾಣಿ, ಆನೆಯ ಗುಂಪು ಇನ್ನಷ್ಟು ಶಕ್ತಿಯುಳ್ಳವು, ಆ ಗುಂಪಿನ ಆನೆಗಳು ಮದಿಸಿದಾಗ ಅತ್ಯಂತ ಶಕ್ತಿಯಿರುವ ಗುಂಪಾಗುತ್ತದೆ. ಮತ್ತೇರಿದ ಆನೆಗಳು ದೈತ್ಯರನ್ನು ಉದ್ದೇಶಿಸಿ ಕೊಟ್ಟ ಉಪಮಾನಗಳು. ಈ ರೀತಿಯ ಅತ್ಯಂತ ಶಕ್ತಿಯುತವಾದ ಮತ್ತೇರಿದ ಆನೆಗಳ ಕುಂಭಸ್ಥಲವನ್ನು ಭೇಧಿಸಿ ಬಗೆಯುವಂತಹ ಶಕ್ತಿಯಿರುವ ಉಗುರುಗಳನ್ನು ಆ ಉಗುರಿನ ಪರಾಕ್ರಮವನ್ನು ಈ ರೀತಿಯಾಗಿ ಕಾಣಬಹುದು.

ಭಗವಂತನ ಉಗುರಿಗೇ ಇಷ್ಟು ಸಾಮರ್ಥ್ಯವಿದ್ದರೆ, ಭಗವಂತನಿಗೆ ಇನ್ನೆಷ್ಟು ಸಾಮರ್ಥವಿರಬಹುದು?
ಆಚಾರ್ಯ: ಈ ಶ್ಲೋಕದಿಂದ ನಾವು ತಿಳಿಯಬೇಕಾದದ್ದು ಭಗವಂತನಿಗೂ, ಅವನ ಅಂಗಗಳಿಗೂ, ಅವನ ಆಭರಣಗಳಿಗೂ, ಆಯುಧಗಳಿಗೂ ವ್ಯತ್ಯಾಸವೇ ಇಲ್ಲ. ಹಾಗಾಗಿ ಸರ್ವಸಮರ್ಥನಾದ ಭಗವಂತನಿಗೆ ಎಷ್ಟು ಸಾಮರ್ಥ್ಯವುಂಟೋ ಹಾಗೆಯೇ ಅವನ ಅಂಗವಾದ ಉಗುರುಗಳು, ಆಯುಧಗಳು ಎಲ್ಲಕ್ಕೂ ಅಷ್ಟೇ ಸಾಮರ್ಥ್ಯವುಂಟು. ಭಗವಂತನ ಹಾಗೂ ಅವನ ಅಂಗಾಂಗಗಳ, ಆಯುಧಗಳ,

ಆಭರಣಗಳ ಸಾಮರ್ಥ್ಯದಲ್ಲಿ ವ್ಯತ್ಯಾಸವನ್ನು ಕಾಣಬಾರದು.

**ಕೇಶವ:** ಈ ಶ್ಲೋಕದಲ್ಲಿ ಶ್ರೀಮದಾಚಾರ್ಯರ ವಿಲಕ್ಷಣವಾದ ಗುಣವಿಶೇಶತೆಯನ್ನು ಎಲ್ಲಿ ಕಾಣುತ್ತೀವಿ?
**ಗುರುಗಳು**: ಈ ಶ್ಲೋಕದಲ್ಲಿ ಜೀವೋತ್ತಮರಾದ ಶ್ರೀಮದಾಚಾರ್ಯರು 'ಅಸ್ಮಾನ್ ಪಾಂತು' ಎನ್ನುವುದರಲ್ಲಿ, ಭಗವಂತನನ್ನು ನಮಿಸುವಾಗ ಭಗವಂತನು ತಮ್ಮನ್ನು ಮಾತ್ರವಲ್ಲದೆ ಎಲ್ಲರನ್ನೂ ಅನುಗ್ರಹ ಮಾಡಲಿ ಎನ್ನುವ ವಿಶಾಲವಾದ ಗುಣವನ್ನು ತೋರಿಸಿದ್ದಾರೆ.

## ಲಕ್ಷ್ಮೀ ಕಾಂತ ಸಮಂತತೋಪಿಕಲಯನ್ ನೈವೇಶಿತುಸ್ತೇ ಸಮಮ್ ।
## ಪಶ್ಯಾಮ್ಯುತ್ತಮ ವಸ್ತು ದೂರತರತೋಽಪಾಸ್ತಂ ರಸೋ ಯೋ ಅಷ್ಟಮಃ ।
## ಯದ್ರೋಷೋತ್ಕರ ದಕ್ಷ ನೇತ್ರ ಕುಟಿಲ ಪ್ರಾನ್ತೋತ್ಥಿತಾಗ್ನಿ ಸ್ಫುರತ್ ।
## ಖದ್ಯೋತೋಪಮ ವಿಸ್ಫುಲಿಙ್ಗಭಸಿತಾ ಬ್ರಹ್ಮೇಶಶಕ್ರೋತ್ಕರಾಃ ॥೨॥

## ಪದ ಛೇದ:

> **ಲಕ್ಷ್ಮೀಕಾಂತ ಸಮಂತತೋಪಿ ಕಲಯನ್ ನೈವ ಈಶಿತುಃ ತೇ ಸಮಮ್**
> **ಪಶ್ಯಾಮಿ ಉತ್ತಮ ವಸ್ತು ದೂರತರತಃ ಅಪಾಸ್ತಮ್ ರಸೋ ಯೋ ಅಷ್ಟಮಃ ।**
> **ಯದ್ರೋಷ ಉತ್ಕರ ದಕ್ಷನೇತ್ರ ಕುಟಿಲ ಪ್ರಾನ್ತ ಉತ್ಥಿತ ಅಗ್ನಿ ಸ್ಫುರತ್**
> **ಖದ್ಯೋತ ಉಪಮ ವಿಸ್ಫುಲಿಙ್ಗ ಭಸಿತಾ ಬ್ರಹ್ಮ ಈಶ ಶಕ್ರ ಉತ್ಕರಾಃ ॥೨॥**

## ಪ್ರತಿಪದಾರ್ಥ:

**ಲಕ್ಷ್ಮೀಕಾಂತ=ಲಕ್ಷ್ಮಿಯಿಂದ ಪ್ರೀತನಾದ, ಲಕ್ಷ್ಮಿಯನ್ನು ಪ್ರೀತಿಮಾಡುವವ; ಸಮಂತತೋಪಿ=ಎಲ್ಲಾಕಡೆಯಲ್ಲಿಯೂ; ಕಲಯನ್=ಪರಿಶೀಲಿಸಿದರೂ; ನೈವ=ಇಲ್ಲ; ಈಶಿತುಃ=ಸರ್ವ ಸಮರ್ಥ (ಒಡೆಯ); ತೇ ಸಮಮ್ = ನಿನ್ನ ಸಮನಾದ; ಪಶ್ಯಾಮಿ = ನೋಡುವುದು; ಉತ್ತಮ ವಸ್ತು=ಉತ್ತಮವಾದ ವಸ್ತು; ದೂರತರತೋ=ದೂರಕ್ಕಿಂತ ದೂರ; ಅಪಾಸ್ತಂ = ಸಿಕ್ಕುವುದಿಲ್ಲ; ರಸೋ ಯೋ ಅಷ್ಟಮಃ= ಎಂಟನೆಯ ರಸದ ಹಾಗೆ; ಯದ್ರೋಷೋ=ಯಾವ ನಿನ್ನ ಕೋಪದಲ್ಲಿ; ಉತ್ಕರ=ಸಮೂಹ (ಗುಂಪು); ದಕ್ಷ ನೇತ್ರ=ಬಲಕಣ್ಣು; ಕುಟಿಲ= ಸೊಟ್ಟನೆಯ (ಓರೆ ನೋಟ); ಪ್ರಾಂತ=ಸ್ಥಳ (ಜಾಗ); ಉತ್ಥಿತ = ಉದಯಿಸಿದ (ಚಿಮ್ಮಿದ); ಅಗ್ನಿ ಸ್ಫುರತ್ = ಪ್ರಕಾಶಮಾನವಾದ ಬೆಂಕಿ; ಖದ್ಯೋತ ಉಪಮ=ಮಿಂಚು ಹುಳದಂತೆ; ವಿಸ್ಫುಲಿಙ್ಗ = ಕಿಡಿ; ಭಸಿತಾ=ಬೂದಿ; ಬ್ರಹ್ಮ ಈಶ ಶಕ್ರ ಉತ್ಕರಾಃ = ಬ್ರಹ್ಮ, ರುದ್ರ, ಇಂದ್ರ ಮೊದಲಾದ ದೇವತೆಗಳ ಸಮೂಹ;**

## ಅನ್ವಯ

> **ಲಕ್ಷ್ಮೀಕಾಂತ ಸಮಂತತೋಪಿ ಕಲಯನ್ ತೇ ಸಮಮ್ ಈಶಿತುಃ ನೈವ ಪಶ್ಯಾಮಿ ಉತ್ತಮ ವಸ್ತು ದೂರತರತಃ ಯೋ ಅಷ್ಟಮಃ ರಸೋ ಅಪಾಸ್ತಮ್ ।**
> **ಯದ್ರೋಷ ಉತ್ಕರ ದಕ್ಷನೇತ್ರ ಕುಟಿಲ ಪ್ರಾನ್ತ ಖದ್ಯೋತ ಉಪಮ ಉತ್ಥಿತ ಅಗ್ನಿ ಸ್ಫುರತ್ ವಿಸ್ಫುಲಿಙ್ಗ ಭಸಿತಾ ಬ್ರಹ್ಮ ಈಶ ಶಕ್ರ ಉತ್ಕರಾಃ ॥**

## ಚಿಂತನೆ:

*ಲಕ್ಷ್ಮೀಕಾಂತನಾದ ಪರಮಾತ್ಮನೇ, ಎಲ್ಲೆಲ್ಲಿ ಹುಡುಕಿದರೂ, ಪರಿಶೀಲಿಸಿ ನೋಡಿದರೂ ನಿನ್ನ ಸಮನಾದ ವಸ್ತು ಕಾಣದಿರುವಾಗ ನಿನಗಿಂತ ಹೆಚ್ಚಿನದಾದದ್ದು ಇರುವುದಾದರೂ ಹೇಗೆ – ಯಾವ ರೀತಿಯಲ್ಲಿ ಎಂಟನೆಯ ರಸ ಅಸಾಧ್ಯವೋ, ಹಾಗೆ ಅಸಾಧ್ಯ. ಯಾವ ನಿಮ್ಮ ಕಡೆಗಣ್ಣ ಓರೆ ನೋಟದಿಂದ ಉಂಟಾಗಿ ಬರುವ , ಮಿಂಚುಹುಳದಂತೆ ಇರುವ ಅಗ್ನಿಯ ಕಿಡಿಯು ಈ ಬ್ರಹ್ಮಾಂಡವನ್ನು ಸೃಷ್ಟಿಸಲು ಕಾರಣ ನಿಮಿತ್ತವಾಗಿರುವ ಬ್ರಹ್ಮರುದ್ರಾದಿ ದೇವತೆಗಳ ಸಮೂಹವನ್ನೇ ಭಸ್ಮ ಮಾಡುತ್ತದೆ – [ಅಂತಹ ಸಂಕರ್ಶನ ರೂಪಿ ಪರಮಾತ್ಮನ ನಖಗಳು ನಮ್ಮನ್ನು ರಕ್ಷಿಸಲಿ]*

## ವಿಶೇಷತೆ:

ಈ ಶ್ಲೋಕದಲ್ಲಿ 'ಲಕ್ಷ್ಮೀಕಾಂತ' ಎಂಬ ಪದದಲ್ಲಿ ನಾವು ಲಕ್ಷ್ಮಿಯನ್ನು ಯಾವ ರೀತಿಯಲ್ಲಿ ವಂದಿಸಬೇಕು ಎಂದು ಆಚಾರ್ಯರು ತೋರಿಸಿಕೊಟ್ಟಿದ್ದಾರೆ. ಲಕ್ಷ್ಮಿಯ ಸ್ಮರಣೆಯೊಂದಿಗೆ ಭಗವಂತನನ್ನು ನಮಿಸಿದರೆ, ಆ ನಮನ ಲಕ್ಷ್ಮಿಗೂ ಸಲ್ಲಿಸಿದಂತೆ. ಲಕ್ಷ್ಮಿಯನ್ನು ಪರಮಾತ್ಮನ ಜೊತೆಯಲ್ಲಿಯೇ ನಮಿಸುವುದು ಸಿದ್ಧಾಂತ. ಭಗವಂತನ ಓರೆಗಣ್ಣಿನ ನೋಟದಿಂದ ಉಂಟಾದ ಸಣ್ಣದಾದ ಕಿಡಿಯೊಂದೇ ಬ್ರಹ್ಮರುದ್ರಾದಿಗಳನ್ನು ಭಸ್ಮ ಮಾಡುವುದೆಂದಾಗ ನಾವು ಇಲ್ಲಿ ಭಗವಂತನ ಪರಾಕ್ರಮವನ್ನು ಕಾಣಬೇಕು.

## ಪ್ರಶ್ನೋತ್ತರ

ಪುರುಷೋತ್ತಮ: ಯದ್ರೋಷ' ಎಂಬುದರ ವಿಶೇಷತೆಯೇನು?
ಆಚಾರ್ಯ: ಯದ್ರೋಷ' ಎಂಬ ಪದದಲ್ಲಿ ಸಂಕರ್ಷನ ರೂಪಿ ಪರಮಾತ್ಮನನ್ನು ಸ್ಮರಿಸಬಹುದು. ಇದು ಕೋಪವನ್ನು ಸೂಚಿಸುವ ಪದವಾದರೂ ಆ ಕೋಪವು ಭಗವಂತನಲ್ಲಿ ಇಲ್ಲ – ಬದಲಾಗಿ ಅದೇ ಕೋಪವು ಹಿರಣ್ಯಕಶಿಪುವಿನಂತಹ ದೈತ್ಯರಿಗೆ ಅಂಜಿಕೆಯನ್ನು ಉಂಟು ಮಾಡುವುದು ಎಂದು ತಿಳಿಯಬಹುದು. ಇಲ್ಲಿ ಸಾಂಕೇತಿಕವಾಗಿ ಭಗವಂತನ ಕೋಪವನ್ನು ಹೇಳುತ್ತಾರೆ.

ಮೇಘಶ್ಯಾಮ: ಸಮಂತತಃ ಎಂದರೆ ಏನು ಅರ್ಥ? ಎಲ್ಲಾ ಕಡೆ ಹುಡುಕಿದೆ ಅಂದರೆ ಯಾವುದನ್ನು ಹೇಳುತ್ತದೆ?
ಗುರುಗಳು: ಸಮಂತತಃ ಎಂದರೆ ಎಲ್ಲಾ ಕಡೆ ಎಂದು ಅರ್ಥ. ಲೌಕಿಕ ಅರ್ಥದಲ್ಲಿ ಎಲ್ಲ್ಲ ಸ್ಥಳಗಳಲ್ಲಿ ಹುಡುಕಿದರೂ ನಿನ್ನ ಸಮನಾದ ವಸ್ತು ಇಲ್ಲ. ವೈದೀಕವಾಗಿ ಅಷ್ಟಾದಶ ವಿದ್ಯೆಗಳು – [ ನಾಲ್ಕು ವೇದಗಳು, ಮಹಾಭಾರತ, ರಾಮಾಯಣ, ಪಞ್ಚರಾತ್ರ ಆಗಮ, ಪುರಾಣಗಳು (೧೮), ೬ ವೆದಾಂಗಗಳು (ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಾಂದಸ್ಸು, ಜ್ಯೋತಿಷ), ಧರ್ಮಶಾಸ್ತ್ರ, ೩ ಮೀಮಾಂಸಗಳು (ಕರ್ಮ ಮೀಮಾಂಸ, ಬ್ರಹ್ಮ ಮೀಮಾಂಸ, ದೇವ ಮೀಮಾಂಸ) ಇವು ಅಷ್ಟಾದಶ ವಿದ್ಯೆಗಳು ] – ಈ ಅಷ್ಟಾದಶ ವಿದ್ಯೆಯಲ್ಲಿ, ಎಲ್ಲೆಲ್ಲಿ ಹುಡುಕಿದರೂ ನಿನ್ನ ಹೊರತು ನಿನ್ನ ಸಮನಾದ ವಸ್ತು ನೋಡಿಲ್ಲ, ಇನ್ನು ಉತ್ತಮವಾದ ವಸ್ತು ಎಲ್ಲಿ ಕಾಣಲು ಸಾಧ್ಯ?

ಪ್ರಾಣೇಶ: ಈ ಶ್ಲೋಕದಲ್ಲಿ ' ಅಷ್ಟಮ ರಸ' ಎಂಬ ದೃಷ್ಟಾಂತವನ್ನು ಏಕೆ ಉಪಯೋಗಿಸಿದ್ದಾರೆ?
ಆಚಾರ್ಯ: ನಮಗೆ ತಿಳಿದಿರುವ ಹಾಗೆ ಷಡ್ರಸಗಳು – ಆರು ರಸಗಳು – ಉಂಟು. ಸಿಹಿ ಉಪ್ಪು ಹುಳಿ ಖಾರ ಕಹಿ ಮತ್ತು ಕಷಾಯ ಎಂಬ ಆರು ರಸಗಳನ್ನು ನಾವು ಗ್ರಹಿಸಬಹುದು, ಈ ಆರನ್ನು ಹೊರತುಪಡಿಸಿದರೆ ಭಗವಂತನಿಗೆ ಸಮಾನವೆನಿಸಬಹುದಾದ ಏಳನೆಯದು – ಇಲ್ಲ, ಹಾಗಿದ್ದರೆ ಅವನಿಗೆ ಉತ್ತಮವಾಗುವಂತಹ ಎಂಟನೆಯದು ಎಲ್ಲಿ ಸಾಧ್ಯ?

ಅಚ್ಚ್ಯುತ: ಭಗವಂತನು ಪ್ರೀತಿಮಾಡಬೇಕು ಅಂದರೆ ಯಾರನ್ನು ಪ್ರೀತಿ ಮಾಡುವನು?
ಗುರುಗಳು: 'ಜ್ಞಾನೀತ್ ಆತ್ಮೇವ ಮೇವತಂ'' ಎಂದು ಗೀತಾದಲ್ಲಿ ಭಗವಂತನು ಹೇಳಿದ್ದಾನೆ. ಜ್ಞಾನವಂತರು ಪರಮಾತ್ಮನ ಪ್ರೀತಿಗೆ ಪಾತ್ರರಾಗುತ್ತಾರೆ. ಭಗವಂತನನ್ನು ಬಿಟ್ಟರೆ ಜ್ಞಾನವು ಹೆಚ್ಚಿಗೆ ಇರುವುದು ಲಕ್ಶ್ಮಿಗೆ. ಹಾಗಾಗಿ ನಿತ್ಯಜ್ಞಾನಿಯಾದ, ನಿತ್ಯಮುಕ್ತಳಾದ ಲಕ್ಷ್ಮೀದೇವಿಯಲ್ಲಿ ಭಗವಂತನಿಗೆ ಪ್ರೀತಿಯಿದೆ.

**ಶ್ರೀಮದ್ವಿಷ್ಣ್ವಂಘ್ರಿ ನಿಷ್ಠಾ ಅತಿಗುಣಗುರುತಮ ಶ್ರೀಮದಾನಂದತೀರ್ಥ**
**ತ್ರೈಲೋಕ್ಯಾಚಾರ್ಯಪಾದೋಜ್ಜ್ವಲಜಲಜಲಸತ್ಪಾಂಸವೋऽಸ್ಮಾನ್ಪುನಂತು ।**
**ವಾಚಾಂಯತ್ರಪ್ರಣೇತ್ರಿತ್ರಿಭುವನಮಹಿತಾ ಶಾರದಾ ಶಾರದೇಂದುಃ**
**ಜ್ಯೋತ್ಸ್ನಾಭದ್ರಸ್ಮಿತಶ್ರೀಧವಳಿತಕಕುಭಾ ಪ್ರೇಮಭಾರಮ್ ಬಭಾರ ॥ ೧ ॥**

## ಪದ ಛೇದ:

**ಶ್ರೀಮತ್ ವಿಷ್ಣು ಅಂಘ್ರಿ ನಿಷ್ಠಾ ಅತಿಗುಣ ಗುರುತಮ ಶ್ರೀಮತ್ ಆನಂದತೀರ್ಥ**
**ತ್ರೈಲೋಕ್ಯ ಆಚಾರ್ಯ ಪಾದ ಉಜ್ಜ್ವಲ ಜಲಜ ಲಸತ್ ಪಾಂಸವಃ ಅಸ್ಮಾನ್ ಪುನಂತು ।**
**ವಾಚಾಂ ಯತ್ರ ಪ್ರಣೇತ್ರಿ ತ್ರಿಭುವನ ಮಹಿತಾ ಶಾರದಾ ಶಾರದ ಇಂದುಃ**
**ಜ್ಯೋತ್ಸ್ನಾ ಭದ್ರ ಸ್ಮಿತಶ್ರೀ ಧವಳಿತ ಕಕುಭಾ ಪ್ರೇಮಭಾರಂ ಬಭಾರ ॥ ೧ ॥**

## ಪ್ರತಿಪದಾರ್ಥ:

**ಶ್ರೀಮತ್=ಲಕ್ಷ್ಮೀಸಮೇತನಾದ; ವಿಷ್ಣು ಅಂಘ್ರಿ=ವಿಷ್ಣುವಿನ ಪಾದಗಳಲ್ಲಿ; ನಿಷ್ಠಾ=ನಿಷ್ಠೆಯಿಂದ(ಅಚಲ ಭಕ್ತಿಯಿಂದ); ಅತಿಗುಣ=ಸಕಲ**

**ಗುಣಗಳನ್ನು ಹೊಂದಿರುವ; ಗುರುತಮ=ಗುರುಗಳಲ್ಲಿ ಶ್ರೇಷ್ಠರಾದ (ಅತ್ಯುನ್ನತ ಗುರು); ಶ್ರೀಮದಾನಂದತೀರ್ಥ=ಆನಂದತೀರ್ಥ ಎಂಬ ಹೆಸರುಳ್ಳ ಗುರುಗಳು; ತ್ರೈಲೊಕ್ಯಾಚಾರ್ಯ=ಮೂರು ಲೋಕಗಳಲ್ಲಿಯೂ ಗುರುಗಳಾದ; ಪಾದ=ಪಾದ; ಉಜ್ಜ್ವಲ=ಪ್ರಕಾಶಮಾನ; ಜಲಜ=ಕಮಲ; ಲಸತ್=ಕೇಸರ; ಪಾಂಸವಃ=ಧೂಳು; ಅಸ್ಮಾನ್=ನಮ್ಮನ್ನು; ಪುನಂತು=ರಕ್ಷಿಸಲಿ; ವಾಚಾಂ ಯತ್ರ ಪ್ರಣೇತ್ರಿ=ವಾಗ್ಇಂದ್ರಿಯವನ್ನು ನಿಯಂತ್ರಿಸುವವಳು; ತ್ರಿಭುವನ ಮಹಿತಾ=ಮೂರು ಲೋಕಗಳಲ್ಲಿ ಆರಾಧಿಸಲ್ಪಡುವ (ಪೂಜಿಸಲ್ಪಡುವ); ಶಾರದಾ=ಸ್ವತಂತ್ರ ಕೊಡುವವಳು; ಶಾರದ ಇಂದುಃ=ಶರತ್ಕಾಲದ ಚಂದ್ರ; ಜ್ಯೋತ್ಸ್ನಾ=ಬೆಳದಿಂಗಳು; ಭದ್ರ=ಮಾಂಗಲಿಕ; ಸ್ಮಿತಶ್ರೀ=ಕಾಂತಿಯುಳ್ಳ ನಗೆ; ಧವಳಿತ=ಬೆಳ್ಳಗೆ ಮಾಡಲ್ಪಟ್ಟ; ಕಕುಭಾ=ಎಲ್ಲ ದಿಕ್ಕುಗಳಲ್ಲಿಯೂ; ಪ್ರೇಮಭಾರಂ ಬಭಾರ=ಪ್ರೇಮದಿಂದ ಧರಿಸಿದ;**

## ಅನ್ವಯ

**ಶ್ರೀಮತ್ ವಿಷ್ಣು ಅಂಘ್ರಿ ನಿಷ್ಠಾ ಅತಿಗುಣ ಗುರುತಮ ಶ್ರೀಮತ್ ಆನಂದತೀರ್ಥ ತ್ರೈಲೋಕ್ಯ ಆಚಾರ್ಯ ಉಜ್ಜ್ವಲ ಜಲಜ ಪಾದ ಪಾಂಸವಃ ಲಸತ್ ಅಸ್ಮಾನ್ ಪುನಂತು ।**

**ಯತ್ರ ತ್ರಿಭುವನ ಮಹಿತಾ ಪ್ರಣೇತ್ರಿ ವಾಚಾಂ ಶಾರದಾ ಶಾರದ ಧವಳಿತ ಕಕುಭಾ ಇಂದುಃ ಜ್ಯೋತ್ಸ್ನಾ ಭದ್ರ ಸ್ಮಿತಶ್ರೀ ಪ್ರೇಮಭಾರಂ ಬಭಾರ ॥**

## ಚಿಂತನೆ:

*'ನಮ್ಮನ್ನು ರಕ್ಷಿಸಲಿ'. ಲಕ್ಷ್ಮೀನಾರಾಯಣನ ಪಾದ ಸೇವೆಯಲ್ಲಿ ನಿರತರಾಗಿರುವ, ಅತಿಗುಣಭರಿತರಾದ ಮತ್ತು ಗುರುಗಳಲ್ಲಿ ಶ್ರೇಷ್ಠರಾದ, ಮೂರು ಲೋಕಗಳಲ್ಲಿ ಖ್ಯಾತರಾದ ಶ್ರೀಮದಾನಂದ ತೀರ್ಥರ ಉಜ್ವಲವಾದ ಕಮಲಪುಷ್ಪಗಳಂತೆ ಇರುವ ಪಾದಗಳಲ್ಲಿ ಕೇಸರದಂತಿರುವ ಧೂಳು ನಮ್ಮನ್ನು ರಕ್ಷಿಸಲಿ.*
*ಮೂರುಲೋಕಗಳಲ್ಲಿಯೂ ಆರಾಧಿಸಲ್ಪಡುವ, ವಾಗಿಂದ್ರಿಯಗಳನ್ನು ನಿಯಂತ್ರಿಸುವ, ಜ್ಞಾನದೊಂದಿಗೆ ಸ್ವತಂತ್ರ ಕೊಡುವ, ಶರತ್ಕಾಲದ ಚಂದ್ರನ ಬೆಳದಿಂಗಳಿನಂತೆ (ಪ್ರಕಾಶಮಾನವಾದ) ಮಂಗಳವಾದ ಕಾಂತಿಯುತವಾದ ನಗೆಯುಳ್ಳ ಭಾರತೀ ದೇವಿ ಬಹು ಪ್ರೇಮದಿಂದ ಧರಿಸುವ ಪಾದಧೂಳಿಯು ನಮ್ಮನ್ನು ರಕ್ಷಿಸಲಿ.*

## ವಿಶೇಷತೆ:

ಈ ಶ್ಲೋಕದಲ್ಲಿ ವಸ್ತುತಃ ಶ್ರೀಮದಾಚಾರ್ಯರ ಪಾದಕ್ಕೆ ನಮನಗಳು ಎನ್ನದೆ, ಕಾಂತಿಯಿಂದ ಕೂಡಿದ ವಿಷ್ಣುವಿನ ಪಾದಗಳಲ್ಲಿ ಸದಾ ನಿಷ್ಠೆಯಿಂದಿರುವವರ ಪಾದದ ಧೂಳಿಯು ನಮ್ಮನ್ನು ರಕ್ಷಿಸಲಿ ಎಂಬಲ್ಲಿ ನಾವು ಎರಡು ವಿಧದ ವಿಶೇಷವಾದ ವಿಚಾರಗಳನ್ನು ಗಮನಿಸಬೇಕು (೧) ಶ್ರೀಮದಾಚಾರ್ಯರು ಸದಾಕಾಲವೂ ಭಗವಂತನ ಪಾದಗಳನ್ನು ನಿಷ್ಠೆಯಿಂದ ಸದಾ ಸೇವೆ ಮಾಡುವುದರಲ್ಲಿ ನಿರತರಾಗಿರುತ್ತಾರೆಯೆಂತಲೂ, ಮತ್ತು (೨) ಅವರ ಪಾದಗಳ ಧೂಳಿಯೇ ನಮ್ಮನ್ನು ಸಂಪೂರ್ಣವಾಗಿ ರಕ್ಷಿಸಬಲ್ಲದು ಎಂದು.

## ಪ್ರಶ್ನೋತ್ತರ:

**ಅಚ್ಯುತ:** ***'ಅತಿಗುಣ ಗುರುತಮ'*** ಎಂಬುದಕ್ಕೆ ವಿವರವಾದ ಅರ್ಥವೇನುಂಟು?

**ಆಚಾರ್ಯ:** ಈ ಶ್ಲೋಕದಲ್ಲಿ ನಾವು ಕಾಣುವ '

ಅತಿಗುಣ' ಈ ಕೆಳಕಂಡ ರೀತಿಯಲ್ಲಿ ಅರ್ಥಮಾಡಬಹುದು –
- ಪರಮಾತ್ಮನಲ್ಲಿ ಸದಾಕಾಲ ಸ್ಮರಣೆಯಲ್ಲಿರುವ ಗುಣವು ಅತಿಗುಣ
- ಪರೋಕ್ಷ ಜ್ಞಾನದಿಂದ ಅಪರೋಕ್ಷ ಜ್ಞಾನವನ್ನು ಪಡೆದವರು
- ಸಂಶಯ ಪರಿಹಾರ ಮಾಡುವವರು, ಅವರಿಗೆ ಸಂಶಯವಿಲ್ಲದವರು ಅತಿಗುಣರು

ಗುರುತಮ ಈ ಕೆಳಕಂಡ ರೀತಿಯಲ್ಲಿ ಅರ್ಥಮಾಡಬಹುದು
- ಪರಮಾತ್ಮನನ್ನೇ ಗುರುವಾಗಿ ಪಡೆದವರು ಗುರುತಮರು
- ಗುರುಗಳಲ್ಲಿಯೇ ಅತಿ ಉತ್ತಮರು
- ಯಾವ ಪ್ರಶ್ನೆ ಕೇಳಿದರೂ (ಶಾಸ್ತ್ರವಿಚಾರ, ವೆದ–ವೇದಾಂತ ವಿಚಾರ, ಸಿದ್ಧಾಂತದ ವಿಚಾರ, ಸಂಗೀತಕಲೆ, ಶಿಲ್ಪಕಲೆ, ಮಲ್ಲಯುದ್ಧ ಈ ರೀತಿಯಾಗಿ ಯಾವ ವಿದ್ಯೆಯಲ್ಲಿಯೇ ಅದರೂ) ಅದಕ್ಕೆ ನಿಸ್ಸಂಶಯವಾಗಿ ಉತ್ತರಿಸುವವರು.

  *ಅಶೃತ ಪ್ರತಿಭಾ ಯಸ್ಯ ಶ್ರುತಿ ಸ್ಮೃತಿ ಅವಿರೋಧಿನಿ*

*ವಿಶೃತಾ ನೃಶುಜಾತಂ ಚೇತ್? ತಂ ವಿದ್ಯಾ ದೇವಸತ್ತಮಮ್*
*ಪ್ರತ್ಯಕ್ಷಮೇವ ಚೇತ್ ಲಕ್ಷಣಂ ದೃಶ್ಯತೇ ಭಗವತಿ ಭಾಷ್ಯಕಾರೇ (ತತ್ವ ಪ್ರದೀಪ)*

ಈ ರೀತಿ ಹೇಳಿರುವಲ್ಲಿ, ಯಾರು ಯಾವ ಪ್ರಶ್ನೆಯನ್ನೂ ಶ್ರುತಿ ಸ್ಮೃತಿಗೆ ವಿರೋಧವಿಲ್ಲದಂತೆ ಪರಿಹಾರ ಮಾಡುವವರು ಅತಿಗುಣ ಗುರುತಮರು. ಅತೀತವಾದ ಗುಣಗಳನ್ನು ಹೊಂದಿದ, ಪರಮಾತ್ಮನನ್ನೇ ಗುರುವಾಗಿ ಪಡೆದವರು ಅತಿಗುಣ ಗುರುತಮರು.

ಹೀಗಾಗಿ ಅತಿಗುಣ ಗುರುತಮ ಎಂಬ ಪದಗಳಲ್ಲಿ ಶ್ರೀಮದಾಚಾರ್ಯರ ಹಿರಿಮೆಯನ್ನು ತಿಳಿಯಬಹುದು. ವಿಷ್ಣುವಿನ ಪಾದಸೇವೆಯಲ್ಲಿ ನಿರತರಾದ ವಾಯುದೇವರ ಜ್ಞಾನ–ಗುಣಗಳಿಗೆ ಸಾಟಿಯಿಲ್ಲ. ಅತಿಗುಣ ಎಂಬ ಪದವು ವಾಯುದೇವರ ಜ್ಞಾನದ ಪೂರ್ಣಪ್ರಮಾಣತೆಯ (ಶಾಸ್ತ್ರವಿಚಾರ, ವೆದ–ವೇದಾಂತ ವಿಚಾರ, ಸಿದ್ಧಾಂತದ ವಿಚಾರ, ಸಂಗೀತಕಲೆ, ಶಿಲ್ಪಕಲೆ, ಮಲ್ಲಯುದ್ಧ ಈ ರೀತಿಯಾಗಿ ಯಾವ ವಿದ್ಯೆಯಯಲ್ಲಿಯೂ ಪೂರ್ಣಪ್ರಮಾಣದ ಜ್ಞಾನವುಳ್ಳ ವಿಶೇಷತೆಯನ್ನು ಹೇಳುತ್ತದೆ.

**ಮಧ್ವಪತಿ**: ಆನಂದತೀರ್ಥ ಎಂಬ ಹೆಸರಿನ ಅರ್ಥವೇನು?
**ಗುರುಗಳು:** ***'ಆನಂದತೀರ್ಥ'*** – ಆನಂದಮಯವಾದ ಭಗವಂತನನ್ನು ತನ್ನ ಶಾಸ್ತ್ರ ಮೂಲಕ ಜಗತ್ತಿಗೆ ತಿಳಿಸಿಕೊಟ್ಟವರು. ಅವರ ಶಾಸ್ತ್ರಜ್ಞಾನವನ್ನು ಪಡೆಯುವಂತಹದ್ದೇ ಆನಂದ. ವೇದಾಂತ ಶಾಸ್ತ್ರವನ್ನು (ಆನಂದಮಯವಾದ ಶಾಸ್ತ್ರಗಳನ್ನು) ಶಿಶ್ಯವೃಂದಗಳಿಗೆ ಅನುಗ್ರಹಿಸಿದ ಗುರುಗಳ ಹೆಸರು (ವಾಸುದೇವ, ಪೂರ್ಣಪ್ರಜ್ಞ ಎಂಬುದು ಇವರ ಇತರ ಹೆಸರುಗಳು). ಸಂಸಾರ ಸಾಗರದಲ್ಲಿ ಮುಳುಗಿರುವವರನ್ನು ದಡಕ್ಕೆ ತಲುಪಿಸುವ, ಆನಂದರೂಪಿಯಾದ ಭಗವಂತನ ಅನುಗ್ರಹಕ್ಕೆ ದಾರಿ ತೋರಿಸುವ ಮತ್ತು ಶಾಸ್ತ್ರಗಳ ಅನುಗ್ರಹದಿಂದ ಪವಿತ್ರಮಾಡುವ – ಪದ – 'ತೀರ್ಥ'. ನಮ್ಮನ್ನು ಆನಂದದ ದಡಕ್ಕೆ ಹಾಯಿಸಿದವರು ಆನಂದತೀರ್ಥರು

**ಪವಮಾನ:** ಶಾರದಾ ಎಂದರೆ ಯಾರು? ಶಾರದಾ ಎಂಬ ಪದದ ಅರ್ಥವೇನು?
**ಆಚಾರ್ಯ:** ***'ಶಾರದಾ'*** – ಶಾರಾ ದದಾತಿ ಇತಿ ಶಾರದಾ – ಶಾರಾ ಎಂದರೆ ಸ್ವತಂತ್ರ, ದದಾತಿ ಎಂದರೆ ಕೊಡುವವಳು. ಜ್ಞಾನ ಸಿಕ್ಕಿದರೆ ಸ್ವಾತಂತ್ರ್ಯ ಸಿಗುತ್ತದೆ. ಜ್ಞಾನವನ್ನು ಕೊಟ್ಟು ಸ್ವತಂತ್ರವನ್ನು ಹೊಂದಿಸುವವಳು ಶಾರದಾ.

ಶಾರಾ ಎಂದರೆ ***ಶೃ ಹಿಂಸಾಯಾಂ*** **– 'ಶೃ'** ಎಂದರೆ ತೊಂದರೆ, ಅಂದರೆ ಅಜ್ಞಾನ (ನಮ್ಮ ಕಷ್ಟಕ್ಕೆ ಕಾರಣ), ಅದನ್ನು **'ದಾ'**' ಧಾತುವಿನ 'ದ್ಯತಿ' ಎಂದರೆ ನಾಶಮಾಡುವವಳು ಶಾರದಾ. – ಅಜ್ಞಾನವನ್ನು ನಾಶಮಾಡಿ ಜ್ಞಾನವನ್ನು ಕೊಡುವಂತಹವಳು ಶಾರದಾ.

ಶಾರದಾ ಎಂದರೆ ಸಮಸ್ತ ದೇವತೆಗಳ ವಾಗಿಂದ್ರಿಯವನ್ನು ನಿಯಮನ ಮಾಡತಕ್ಕಂತಹ, ವಾಗಭಿಮಾನಿ ದೇವತೆಯಾದ ಸರಸ್ವತಿ ಭಾರತೀ ದೇವಿ.



*ಚತುರ್ಭುಜಂ ಮಹಾಕಾಯಂ ಸರ್ವವೈಷ್ಣವ ಶೇಖರಮ್ ।*
*ಗದಾಭಯಂಕರಂ ಹಸ್ತೌ ಹೃದಿಸ್ಥೋ ಸುಕೃತಾಂಜಲಿಮ್ ॥*

ಜನುಮ ಜನುಮದಲಿ ಎನಗಿರಲಿ,
ಹನುಮ ಭೀಮ ಮಧ್ವ ಮುನಿಗಳ ಸೇವೆಯು

ಶ್ರೀ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಕೃಷ್ಣಾರ್ಪಣಮಸ್ತು